ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಬೀದರ್ ಬ್ರೀಮ್ಸ್ ಕಾಲೇಜಿನ ಅವ್ಯವಹಾರದ ಬಗ್ಗೆ

ಶ್ರೀ ಅರವಿಂದ ಕುಮಾರ್ ಅರಳಿ(ವಿಧಾನಸಭೆಯಿಂದ ಚುನಾಯಿತರಾದವರು) –

03 (48) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೀದರ್ ನಗರದ ಬ್ರೀಮ್ಸ್ ಕಾಲೇಜಿನಲ್ಲಿ ನಡೆದಿದೆ ಎನ್ನಲಾದ ರೂ.18.00 ಕೋಟಿ ರೂಪಾಯಿಯ ಅವ್ಯವಹಾರದ ತನಿಖೆ ಯಾವ ಹಂತದಲ್ಲಿದೆ; (ವಿವರ ನೀಡುವುದು)

(ಆ) ಬ್ರೀಮ್ಸ್‌ನಲ್ಲಿ ನಡೆದ ಅವ್ಯವಹಾರಕ್ಕೆ ಕಾರಣರಾದವರು ಎನ್ನಲಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನಿಯೋಜನೆ ಮೇಲೆ ಬಂದಿರುವ ಗುಮಾಸ್ತರನ್ನು ಅದೇ ಸ್ಥಳದಲ್ಲಿ ಮುಂದುವರೆಸಿರುವುದರ ಬಗ್ಗೆ ಸರ್ಕಾರದ ಉದ್ದೇಶವೇನು; ಅವರನ್ನು ಮೂಲ ಇಲಾಖೆಗೆ ಕಳುಹಿಸದೇ ಇರುವುದಕ್ಕೆ ಕಾರಣವೇನು; (ವಿವರ ನೀಡುವುದು)

(ಇ) ಕಳೆದ ಅಧಿವೇಶನದಲ್ಲಿ ತನಿಖೆ ನಡೆಸುವುದಾಗಿ ಸರ್ಕಾರ ಭರವಸೆ ನೀಡಿದ್ದು, ಇಲ್ಲಿಯವರೆಗೆ ತನಿಖೆ ಆರಂಭಿಸದೇ ಇರುವುದಕ್ಕೆ ಕಾರಣವೇನು; ಇದರಲ್ಲಿ ಸರ್ಕಾರದ ಪಾತ್ರವಿದೆಯೇ?